# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 286

ಮಾನ್ಯ ಸದಸ್ಯರ ಹೆಸರು : ಶ್ರೀ. ಎಸ್.ರವಿ
(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ: : 22.09.2020

ಉತ್ತರಿಸುವ ಮಾನ್ಯ ಸಚಿವರು : ಮಾನ್ಯ ಕೃಷಿ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸರ್ಕಾರದಿಂದ ಕೈಗೊಳ್ಳುತ್ತಿರುವ ಬೆಳೆ ಸಮೀಕ್ಷೆ ದಾಖಲೆಯನ್ನು ಸರ್ಕಾರದಿಂದ ದೊರೆಯುವ ಎಲ್ಲಾ ಸವಲತ್ತುಗಳಿಗೆ ಕಡ್ಡಾಯವಾಗಿ ಪರಿಗಣಿಸಲಾಗುವುದೇ; ಹಾಗಿದ್ದಲ್ಲಿ, ಇದಕ್ಕೆ ಅನುಸರಿಸುತ್ತಿರುವ ಮಾನದಂಡಗಳೇನು; | ಸರ್ಕಾರದಿಂದ ಕೈಗೊಳ್ಳುತ್ತಿರುವ ಬೆಳೆ ಸಮೀಕ್ಷೆ ದಾಖಲೆಯನ್ನು ಸರ್ಕಾರದಿಂದ ದೊರೆಯುವ ಕೆಲವೊಂದು ಸವಲತ್ತುಗಳಿಗೆ ಪರಿಗಣಿಸಲಾಗುವುದು.<br><br>2020-21ನೇ ಸಾಲಿನ ಬೆಳೆ ಸಮೀಕ್ಷೆ ಕುರಿತು ಸರ್ಕಾರವು ಹೊರಡಿಸಿರುವ ಸರ್ಕಾರದ ಆದೇಶದ ಪ್ರಕಾರ ಬೆಳೆ ಸಮೀಕ್ಷೆ ದತ್ತಾಂಶವನ್ನು ಈ ಕೆಳಗಿನ ಚಟುವಟಿಕೆಗಳಿಗೆ ಬಳಸಲು ಅನುಮತಿ ನೀಡಿದೆ.<br><br>I. ಸಾಂಖ್ಯಿಕ ಇಲಾಖೆ, ಕೃಷಿ, ರೇಷ್ಮೆ ಮತ್ತು ತೋಟಗಾರಿಕೆ ಇಲಾಖೆಗಳ ಬೆಳೆ ವಿಸ್ತೀರ್ಣ ಎಣಿಕಾ ಕಾರ್ಯದಲ್ಲಿ;<br>II. ಬೆಳೆ ಕಟಾವು ಪ್ರಯೋಗಗಳನ್ನು ಕೈಗೊಳ್ಳಲು ಹಾಗೂ ತಾಕಿನ/ಸರ್ವೆ ನಂಬರ್ ಆಯ್ಕೆ ಮಾಡಲು; (ಎಲ್ಲೆಲ್ಲಿ ಸಾಧ್ಯವೋ ಅಲ್ಲಲ್ಲಿ ಎನ್‌ಎಸ್‌ಎಸ್‌ಒ ಮತ್ತು ಭಾರತ ಸರ್ಕಾರದ ಅನುಮೋದನೆಯೊಂದಿಗೆ)<br>III. ಎನ್.ಡಿ.ಆರ್.ಎಫ್ / ಎಸ್.ಡಿ.ಆರ್.ಎಫ್ ಅಡಿಯಲ್ಲಿ ಸಹಾಯಧನ ನೀಡಲು;<br>ಅ) ಪ್ರಕೃತಿ ವಿಕೋಪದ ಸಂದರ್ಭದಲ್ಲಿ ಬೆಳೆ ಹಾನಿ ಕುರಿತು ವರದಿ ಸಿದ್ದಪಡಿಸಲು;<br>ಆ) ಹಾನಿಗೊಳಗಾದ ಬೆಳೆ ವಿಸ್ತೀರ್ಣದ ವಿವರ ಸಿದ್ಧಪಡಿಸಲು,<br>ಇ) ಅರ್ಹ ಫಲಾನುಭವಿಗಳ ಪಟ್ಟಿಯನ್ನು ತಯಾರಿಸುವ ಸಂದರ್ಭದಲ್ಲಿ;<br>IV. ಬೆಳೆ ವಿಮಾ ಯೋಜನೆ, ತಾಕು ಹಂತದ ಬೆಳೆ ಪರಿಶೀಲನೆ;<br>V. ಕನಿಷ್ಠ ಬೆಂಬಲ ಬೆಲೆ ನಿಗದಿ ಹಾಗೂ ಯೋಜನೆಯಡಿ ಅರ್ಹ ಫಲಾನುಭವಿಗಳನ್ನು ಗುರುತಿಸಲು; |

| ಕ್ರ.ಸಂ | ಪ್ರಶ್ನೆ | ಉತ್ತರ |
| --- | --- | --- |
| | | VI. ಬೆಳೆ ಮಾನದಂಡಗಳಿಗೆ ಅನುಗುಣವಾಗಿ ಕೃಷಿ, ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆಗಳ ಫಲಾನುಭವಿ ಆಧಾರಿತ ಯೋಜನೆಗಳ ಅನುಷ್ಠಾನಕ್ಕಾಗಿ;<br>VII. ಆರ್.ಟಿ.ಸಿ.ಯಲ್ಲಿ ಬೆಳೆ ವಿವರ ದಾಖಲಾತಿಗಾಗಿ;<br>ಮುಂದುವರೆದು, ಬೆಳೆ ಸಮೀಕ್ಷೆ ಮಾಹಿತಿಯನ್ನು ಬಳಸಿಕೊಂಡು ರೈತರಿಗೆ ಸಕಾಲದಲ್ಲಿ ಯಾವುದೇ ತೊಡಕುಗಳಿಲ್ಲದೇ ಪರಿಹಾರವನ್ನು ವರ್ಗಾಯಿಸುವ ನಿಟ್ಟಿನಲ್ಲಿ 2018-19ನೇ ಸಾಲಿನಿಂದ ರೈತರಿಗೆ ಬೆಳೆ ವಿಮೆ ನಷ್ಟ ಪರಿಹಾರ ಇತ್ಯರ್ಥಪಡಿಸಲು, 2019-20ನೇ ಸಾಲಿನಲ್ಲಿ ಕನಿಷ್ಠ ಬೆಂಬಲ ಬೆಲೆ ಮತ್ತು ಮುಸುಕಿನ ಜೋಳ ಬೆಳೆದ ರೈತರಿಗೆ ರೂ.5000/- ಆರ್ಥಿಕ ಸಹಾಯಕ ನೀಡುವ ಯೋಜನೆಗಳಿಗೆ ಬಳಸಿಕೊಳ್ಳಲಾಗಿದೆ;<br>**ಅನುಸರಿಸುತ್ತಿರುವ ಮಾನದಂಡಗಳು:**<br>ಅ. ಬೆಳೆ ಸಮೀಕ್ಷೆ ಕಾರ್ಯಕ್ರಮದಲ್ಲಿ ನಮೂದಿಸಿರುವ ವಿವರಗಳು ಆಯಾ ಯೋಜನೆಯಡಿ ನಿಗದಿಪಡಿಸಿರುವ ಮಾರ್ಗಸೂಚಿಗಳಿಗೆ ಅನುಗುಣವಾಗಿ ಇರಬೇಕು;<br>ಆ. ಸಮೀಕ್ಷೆಯಲ್ಲಿ ನಮೂದಿಸಿರುವ ಬೆಳೆ ಮತ್ತು ಯಾವ ಬೆಳೆಗೆ ಪರಿಹಾರ/ ಸಹಾಯಧನವನ್ನು ನೀಡಲು ನಿರ್ಧರಿಸಲಾಗಿರುತ್ತದೆಯೋ ಅಂತಹ ಬೆಳೆಗಳು ಒಂದಕ್ಕೊಂದು ತಾಳೆಯಾಗುವಂತಿರಬೇಕು; |
| ಆ) | ಬೆಳೆ ಸಮೀಕ್ಷೆಯಲ್ಲಿ ಉಂಟಾಗುವ ವ್ಯತ್ಯಾಸಗಳಿಗೆ ಕೈಗೊಳ್ಳಬೇಕಾದ ಪರ್ಯಾಯ ಕ್ರಮಗಳು ಯಾವುವು; | ಬೆಳೆ ಸಮೀಕ್ಷೆಯಲ್ಲಿ ವ್ಯತ್ಯಾಸಗಳು ಕಂಡುಬಂದಲ್ಲಿ (Private Resident) PR ಗಳು ಮರು ಸರ್ವೆ ಮಾಡುವ ಮುಖಾಂತರ ವ್ಯತ್ಯಾಸಗಳನ್ನು ಸರಿಪಡಿಸಲಾಗುವುದು. |
| ಇ) | ಬೆಳೆ ವಿಮೆಯ ಕಂತನ್ನು ರೈತರು ಬ್ಯಾಂಕ್ ಗಳಲ್ಲಿ ಪಾವತಿಸಲು ಅವಕಾಶ ಕಲ್ಪಿಸಲಾಗಿದೆಯೇ; ಇದರಿಂದ ರೈತರಿಗೆ ಆಗುತ್ತಿರುವ ತೊಂದರೆಗಳು ಸರ್ಕಾರದ ಗಮನಕ್ಕೆ ಬಂದಿವೆಯೇ; ಬಂದಿದ್ದಲ್ಲಿ, ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ; | ಪ್ರಧಾನ ಮಂತ್ರಿ ಫಸಲ್ ಬಿಮಾ ಯೋಜನೆಯನ್ನು ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ರಾಜ್ಯದಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಸಾಲ ಪಡೆದ ರೈತರಿಗೆ ಬೆಳೆ ವಿಮೆಯ ಕಂತನ್ನು ಬ್ಯಾಂಕ್ ಗಳಲ್ಲಿ ಪಾವತಿಸಲು ಅವಕಾಶ ಕಲ್ಪಿಸಲಾಗಿದೆ. ಸಾಲ ಪಡೆಯದ ರೈತರು ಖಾತೆ ಹೊಂದಿರುವ ಯಾವುದಾದರೂ ಬ್ಯಾಂಕ್ ನಿಂದ ಅಥವಾ ಸಿ.ಎಸ್.ಸಿ (Common Service Center) ಕೇಂದ್ರಗಳಲ್ಲಿ ಬೆಳೆ ವಿಮೆ ಪ್ರೀಮಿಯಮ್ ಮೊತ್ತವನ್ನು ಪಾವತಿಸಲು ಅವಕಾಶ ಕಲ್ಪಿಸಲಾಗಿದೆ. ಈ ವಿಧಾನದಲ್ಲಿ ರೈತರಿಗೆ ಯಾವುದೇ ತೊಂದರೆಗಳು ಆಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಈ) | ರೈತರ ಬೆಳೆ ವಿಮೆ ಕಂತನ್ನು ಪಾವತಿಸಲು ಹೋಬಳಿ ಕೇಂದ್ರಗಳಲ್ಲಿರುವ ಸಿಎಸ್‌ಸಿ ಅಂಚೆ ಕಛೇರಿ ಅಥವಾ ಭಾರತೀಯ ಜೀವ ವಿಮಾ ನಿಗಮ ಕಛೇರಿಗಳಲ್ಲಿ ಪಾವತಿಸಲು ಅವಕಾಶ ಕಲ್ಪಿಸಲು ಇರುವ ಅಡಚಣೆಗಳು ಏನು; | ಪ್ರಧಾನ ಮಂತ್ರಿ ಫಸಲ್ ಬಿಮಾ ಯೋಜನೆಯನ್ನು ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ರಾಜ್ಯದಲ್ಲಿ ಅನುಷ್ಠಾನಗೊಳಿಸಲಾಗುತ್ತಿದ್ದು, ಸಾಲ ಪಡೆಯದ ರೈತರು ಸಿ.ಎಸ್.ಸಿ (Common Service Center) ಕೇಂದ್ರಗಳಲ್ಲಿ ಬೆಳೆ ವಿಮೆ ಪ್ರೀಮಿಯಮ್ ಮೊತ್ತವನ್ನು ಪಾವತಿಸಲು ಅವಕಾಶ ಕಲ್ಪಿಸಲಾಗಿದೆ. ರಾಜ್ಯದಲ್ಲಿ ಒಟ್ಟು 15,939 ನೋಂದಾಯಿತ ಸಿ.ಎಸ್.ಸಿ (Common Service Center) ಕೇಂದ್ರಗಳಿದ್ದು, ಇಲ್ಲಿ ರೈತರಿಗೆ ಬೆಳೆ ವಿಮೆ ಯೋಜನೆಯ ಬಗ್ಗೆ ಸವಿವರವಾದ ಮಾಹಿತಿಯನ್ನು ಸಹ ನೀಡಲಾಗುತ್ತಿದೆ. ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ಅಂಚೆ ಕಛೇರಿ ಅಥವಾ ಭಾರತೀಯ ಜೀವಾ ವಿಮಾ ನಿಗಮ ಕಛೇರಿಗಳಲ್ಲಿ ಬೆಳೆ ವಿಮೆ ಪ್ರೀಮಿಯಮ್ ಮೊತ್ತವನ್ನು ಪಾವತಿಸಲು ಕೇಂದ್ರ ಸರ್ಕಾರದ ಮಾರ್ಗ ಸೂಚಿಯಲ್ಲಿ ಅವಕಾಶವಿರುವುದಿಲ್ಲ. |
| ಉ) | ನೋಂದಾಯಿತ ಏಜೆಂಟ್ ಗಳ ಮುಖಾಂತರ ಪಾವತಿಸಲು ಅವಕಾಶವಿದೆಯೇ; ಇಲ್ಲವಾದ್ದಲ್ಲಿ ಯಾವ ಕಾರಣಕ್ಕೆ ನೀಡಿರುವುದಿಲ್ಲ; ಇದರಿಂದ ಸರ್ಕಾರಕ್ಕೆ ಆಗುವ ತೊಂದರೆ ಏನು? | ಕೇಂದ್ರ ಸರ್ಕಾರದ ಮಾರ್ಗಸೂಚಿಯಲ್ಲಿ ನೋಂದಾಯಿತ ಏಜೆಂಟ್ ಗಳ ಮುಖಾಂತರ ಪಾವತಿಸಲು ಅವಕಾಶವಿರುವುದಿಲ್ಲ. ಬದಲಾಗಿ ರೈತರು ಬೆಳೆ ವಿಮೆ ಕಂತನ್ನು ಬ್ಯಾಂಕ್, ಪ್ರಾಥಮಿಕ ಕೃಷಿ ಸಹಕಾರ ಸಂಘ (Primary Agriculture Co-operative Society) ಮತ್ತು ಸಾಮಾನ್ಯ ಸೇವಾ ಕೇಂದ್ರಗಳಲ್ಲಿ ಪಾವತಿಸಲು ಈಗಾಗಲೇ ಅವಕಾಶ ಕಲ್ಪಿಸಲಾಗಿರುತ್ತದೆ. ಅದರಂತೆ ಯಾವುದೇ ತೊಂದರೆಯಿಲ್ಲದೇ ರೈತರು ವಿಮೆ ಕಂತನ್ನು ಪಾವತಿಸುತ್ತಿದ್ದಾರೆ. |

**ಸಂಖ್ಯೆ: ಕೃಇ/112/ಕೃಕೈಉ/2020**

(ಬಿ.ಸಿ.ಪಾಟೀಲ್)
ಕೃಷಿ ಸಚಿವರು